ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಕೊರೋನ ಸೊಂಕಿನ ವಿರುದ್ಧ ಬಳಸಲಾಗುವ ಲಸಿಕೆಯ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) -

18 (181) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಷ್ಟ್ರಮಟ್ಟದಲ್ಲಿ ಕೊರೋನಾ ಸೊಂಕಿನ ವಿರುದ್ಧ ಬಳಸಲಾಗುವ ಲಸಿಕೆಯ ಎಷ್ಟು ವಿಧಗಳಿಗೆ ರಾಜ್ಯದಲ್ಲಿ ಇಲ್ಲಿಯವರೆಗೆ ಕ್ಲೀನಿಕಲ್ ಟ್ರಯಲ್ ನಡೆಸಲಾಗಿದೆ; (ವಿವರ ನೀಡುವುದು)

(ಆ) ಈ ಲಸಿಕೆಯ ಕ್ಲೀನಿಕಲ್ ಟ್ರಯಲ್ ನಡೆಸಲು ರಾಜ್ಯ ಸರ್ಕಾರದಿಂದ ಅಥವಾ ಕೇಂದ್ರ ಸರ್ಕಾರದಿಂದ ಯಾವುದಾದರೂ ಮಾನದಂಡಗಳನ್ನು ರೂಪಿಸಲಾಗಿದೆಯೇ; (ವಿವರ ನೀಡುವುದು)

(ಇ) ರಾಜ್ಯದಲ್ಲಿ ಒಟ್ಟು ಎಷ್ಟು ವ್ಯಕ್ತಿಗಳು ಕ್ಲೀನಿಕಲ್ ಟ್ರಯಲ್‌ಗೆ ಒಳಪಟ್ಟಿದ್ದಾರೆ ; (ಜಿಲ್ಲಾವಾರು ವಿವರ ನೀಡುವುದು)

(ಈ) ಕ್ಲೀನಿಕಲ್ ಟ್ರಯಲ್‌ಗೆ ಒಳಪಡುವ ವ್ಯಕ್ತಿಗಳಿಂದ ಲಿಖಿತ ಅನುಮತಿ ಪತ್ರ ಪಡೆಯಲಾಗಿದೆಯೇ ; ಮತ್ತು ಅವರ ಕುಟುಂಬ ಸದಸ್ಯರಿಗೂ ಮಾಹಿತಿ ನೀಡಲಾಗಿದೆಯೇ ; (ವಿವರ ನೀಡುವುದು)

(ಉ) ಈ ಕ್ಲೀನಿಕಲ್ ಟ್ರಯಲ್‌ಗೆ ಒಳಪಟ್ಟ ವ್ಯಕ್ತಿಗಳಿಂದ ಅಥವಾ ಅವರ ಕುಟುಂಬಸ್ಥರಿಂದ ಸರ್ಕಾರಕ್ಕೆ ಯಾವುದಾದರೂ ದೂರುಗಳನ್ನು ಸಲ್ಲಿಸಲು ಸೂಕ್ತ ವ್ಯವಸ್ಥೆಯನ್ನು ಕಲ್ಪಿಸಲಾಗಿದೆಯೇ ; ಕಲ್ಪಿಸಲಾಗಿದ್ದಲ್ಲಿ, ಇಲ್ಲಿಯವರೆಗೆ ಒಟ್ಟು ಎಷ್ಟು ದೂರುಗಳು ಸಲ್ಲಿಕೆಯಾಗಿದೆ ; (ವಿವರ ನೀಡುವುದು) ಮತ್ತು ಈ ದೂರುಗಳ ಕುರಿತು ಸರ್ಕಾರದ ಕ್ರಮವೇನು ? (ವಿವರ ನೀಡುವುದು)